RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಆಗಸ್ಟ್ ೧೫, ೨೦೧೩ (ಶ್ರಾವಣ ೨೪, ಶಕ ವರ್ಷ ೧೯೩೫)<br>Bangalore, Thursday, August 15, 2013 (Shravana 24, Shaka Varsha 1935) | ಸಂಚಿಕೆ ೩೩<br>Issue 33 |
|---|---|---|

## ಭಾಗ ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 75 ಪಿಟಿಡಿ 2013, ಬೆಂಗಳೂರು, ದಿನಾಂಕ : 20-06-2013.**

ಆಯುಷ್ ಇಲಾಖೆಯಡಿ ಬರುವ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು, ಇಲ್ಲಿ ಪೆಥಾಲಜಿ ಮತ್ತು ಮೈಕ್ರೋಬಯಾಲಜಿ ವಿಭಾಗದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಡಾ॥ ಶಾಹೀದಾ ಎ.ಎಸ್. ಇವರಿಗೆ ಎ.ಐ.ಸಿ.ಟಿ.ಇ. ವೇತನ ಶ್ರೇಣಿ ರೂ. 37400-67000 AGP 10000/-ರಲ್ಲಿ ಪ್ರಾಧ್ಯಾಪಕರಾಗಿ ಸ್ಥಾನಾಪನ್ನ ಬಡ್ತಿ ನೀಡಿ, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು, ಇಲ್ಲಿ ಖಾಲಿ ಇರುವ ಪೆಥಾಲಜಿ ಮತ್ತು ಮೈಕ್ರೋಬಯಾಲಜಿ ವಿಭಾಗದ ಪ್ರಾಧ್ಯಾಪಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ).

**P.R. 401**

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 195 ಪಿಐಎಂ 2013, ಬೆಂಗಳೂರು, ದಿನಾಂಕ : 21-06-2013.**

ಆಯುಷ್ ಇಲಾಖೆಯಡಿ ಬರುವ ಸರ್ಕಾರಿ ತಾರಾನಾಥ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಬಳ್ಳಾರಿ, ಇಲ್ಲಿ ಸಹಾಯಕ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕುಡುತಿನಿ ಈಶ್ವರಪ್ಪ ಚನ್ನಬಸಪ್ಪ ಇವರಿಗೆ ವೇತನ ಶ್ರೇಣಿ ರೂ. 28100-700-28800-800-33600-900-39000-1050-45300-1200-50100 ರಲ್ಲಿ ಆಡಳಿತಾಧಿಕಾರಿ ಹುದ್ದೆಗೆ ಸ್ಥಾನಾಪನ್ನ ಬಡ್ತಿ ನೀಡಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಯುಷ್ ಇಲಾಖೆ, ಬೆಂಗಳೂರು, ಇಲ್ಲಿ ಶ್ರೀ ಪಿ.ಎನ್. ಬಂಗಾರಿಯವರ ವಯೋನಿವೃತ್ತಿಯಿಂದ ತೆರವಾದ ಆಡಳಿತಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ).

**P.R. 402**

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಲಾ 48 ಎಲ್ಎಡಿ 2012, ಬೆಂಗಳೂರು, ದಿನಾಂಕ : 29ನೇ ಜೂನ್, 2013.**

ಶ್ರೀ ಜಿ.ದಕ್ಷಿಣಾಮೂರ್ತಿ, ಪ್ರಥಮ ನಿರ್ದೇಶಕರು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ– ಇವರ ಅಧಿಕಾರದ ಅವಧಿ ದಿನಾಂಕ: 30–06–2013ರಂದು ಮುಕ್ತಾಯಗೊಳ್ಳುವುದರಿಂದ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಪ್ರಭಾರವನ್ನು ಶ್ರೀ. ಹೆಚ್.ಕೆ.ಜಗದೀಶ್, ಅಪರ ಕಾರ್ಯದರ್ಶಿ, ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ – ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಸ್ತಾಂತರಿಸಲಾಗಿದೆ. ಹಾಗೂ ಶ್ರೀ ಜಿ.ದಕ್ಷಿಣಾಮೂರ್ತಿಯವರನ್ನು ಈ ಕೂಡಲೇ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಪ್ರಥಮ ನಿರ್ದೇಶಕರ ಹುದ್ದೆಯ ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಕೆ.ಲಕ್ಷ್ಮೀನರಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ) (ಆಡಳಿತ–2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

P.R. 404
SC - 50

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 49 ಯುಡಬ್ಲ್ಯೂಇ 2013, ಬೆಂಗಳೂರು, ದಿನಾಂಕ : 05ನೇ ಜುಲೈ, 2013.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 521 ಎಸ್.ಎ.ಎಸ್ 2013 ದಿನಾಂಕ: 04–07–2013ರಲ್ಲಿ ಶ್ರೀ.ರಾಜೀವ್ ಚಾವ್ಲಾ ಐ.ಎ.ಎಸ್ (ಕೆ.ಎನ್–87) ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಪ್ರಸ್ತುತ ಖಾಲಿ ಇರುವ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ನೇಮಕ ಮಾಡಲು ಸದರಿಯವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಅದರಂತೆ, ಶ್ರೀ.ರಾಜೀವ್ ಚಾವ್ಲಾ, ಐ.ಎ.ಎಸ್ (ಕೆ.ಎನ್ 87) ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ.ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

P.R. 405

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಸಸ/ಆ–1/88/ಎಫ್.ಪಿ.ಪಿ/2002, ಬೆಂಗಳೂರು, ದಿನಾಂಕ : 02ನೇ ಜುಲೈ, 2013.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ನಿರ್ದೇಶಕರ (ಸಂಶೋಧನಾ ಮತ್ತು ಉಲ್ಲೇಖನಾ) ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ಕವಿಸಸ/ಆ–1/88/ಎಫ್.ಪಿ.ಪಿ./2002, ದಿನಾಂಕ:23–05–2013.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(i)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ನಿರ್ದೇಶಕರ(ಪ್ರಭಾರ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ಗುಣಶೇಖರನ್, ಇವರಿಗೆ ದಿನಾಂಕ:23–05–2013ರಿಂದ ಅಂದರೆ ಸದರಿ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.48900–1200–52500–1350–60600–1500–63600ರಲ್ಲಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

ವಿಶೇಷ ಮಂಡಳಿಯ ಆದೇಶಾನುಸಾರ,
**ನಜೀರ್ ಅಹಮದ್,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

P.R. 406
SC - 50

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಸಸ/ಆ–1/32/ಉ.ನಿ.ಅ.ಕಾ.ಮುಂ./2012, ಬೆಂಗಳೂರು, ದಿನಾಂಕ : 05ನೇ ಜುಲೈ, 2013.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಅಧೀನ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ

ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.28100–700–28800–800–33600–900–39000–1050–45300–1200–50100ರಲ್ಲಿ ಅಧೀನ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

1. ಶ್ರೀಮತಿ ಎಂ.ಎಸ್. ಕ್ಷಮಾ
2. ಶ್ರೀಮತಿ ಎಂ. ವಿದ್ಯಾಶ್ರೀ

ಸಭಾಧ್ಯಕ್ಷರ ಆದೇಶಾನುಸಾರ,
**ನಜೀರ್ ಅಹಮದ್,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

**P.R. 407**
**SC - 50**

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಸಸ/ಆ–1/33/ಎಫ್.ಪಿ.ಪಿ./97, ಬೆಂಗಳೂರು, ದಿನಾಂಕ : 05ನೇ ಜುಲೈ, 2013.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಉಪ ಕಾರ್ಯದರ್ಶಿ (ಸಂ.ವ್ಯ.ವಿ) ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ಕವಿಸಸ/ಆ–1/113/ಎಫ್.ಪಿ.ಪಿ./2010, ದಿನಾಂಕ:01–09–2013.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಉಪ ಕಾರ್ಯದರ್ಶಿ(ಪ್ರಭಾರ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಮಲ್ಲಪ್ಪ ಬಿ.ಕಾಳೆ, ಇವರಿಗೆ ದಿನಾಂಕ:01–09–2012ರಿಂದ ಅಂದರೆ ಸದರಿ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಅಧೀನ ಕಾರ್ಯದರ್ಶಿ ವೃಂದದ ಜ್ಯೇಷ್ಠತೆ ಹಾಗೂ ಮುಂಬಡ್ತಿ ದಿನಾಂಕಗಳನ್ನು ಪುನರಾವಲೋಕಿಸುವ ಷರತ್ತುಗಳಿಗೆ ಒಳಪಟ್ಟು ವೇತನ ಶ್ರೇಣಿ ರೂ.40050–1050–45300–1200–52500–1350–56550ರಲ್ಲಿ ಉಪ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

ಸಭಾಧ್ಯಕ್ಷರ ಆದೇಶಾನುಸಾರ,
**ನಜೀರ್ ಅಹಮದ್,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

**P.R. 408**
**SC - 50**

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಸಸ/ಆ–1/33/ಸ.ನಿ.ಶಾ.ಮುಂ./2012, ಬೆಂಗಳೂರು, ದಿನಾಂಕ : 05ನೇ ಜುಲೈ, 2013.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಶಾಖಾಧಿಕಾರಿ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಹಿರಿಯ ಸಹಾಯಕರುಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ನೌಕರರುಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.22800–600–24600–700–28800–800–33600–900–39000–1050–43200ರಲ್ಲಿ ಶಾಖಾಧಿಕಾರಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

1. ಶ್ರೀ ಜೆ.ರಂಗಪ್ಪ
2. ಶ್ರೀ ಸುಬ್ರಮಣ್ಯ ಎಸ್.ಕುಮಟ
3. ಶ್ರೀಮತಿ ಬಿ.ಎಸ್.ಮಂಜುಳ
4. ಶ್ರೀ ಕೆ.ಟಿ. ಶ್ರೀನಿವಾಸ

ಸಭಾಧ್ಯಕ್ಷರ ಆದೇಶಾನುಸಾರ,
**ನಜೀರ್ ಅಹಮದ್,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

**P.R. 409**
**SC - 50**

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಸಸ/ಆ–1/33/ಎಫ್.ಪಿ.ಪಿ./97, ಬೆಂಗಳೂರು, ದಿನಾಂಕ : 05ನೇ ಜುಲೈ, 2013.**

**ವಿಷಯ:** ಕರ್ನಾಟಕ ವಿಧಾನಸಭೆ ಸಚಿವಾಲಯದ ಉಪ ಕಾರ್ಯದರ್ಶಿ(ಸಂ.ವ್ಯ.ವಿ.) ಹಾಗೂ ಜಂಟಿ ನಿರ್ದೇಶಕರು (ಸಂಶೋಧನಾ ಮತ್ತು ಉಲ್ಲೇಖನಾ) ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ.

2003ರ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಹಾಗೂ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 19(3)(ಎ)ನ್ನು ಓದಿಕೊಂಡಂತೆ ಈ ಸಚಿವಾಲಯದಲ್ಲಿ ಅಧೀನ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.40050–1050–45300–1200–52500–1350–56550ರಲ್ಲಿ ಅವರ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆಗಳಿಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

1. ಶ್ರೀಮತಿ. ಶಶಿಕಲಾ ಭಟ್ – ಉಪ ಕಾರ್ಯದರ್ಶಿ
2. ಶ್ರೀ ಸೈಯದ್ ನಿಶಾತ್ ಮೊಹಮ್ಮದ್ – ಜಂಟಿ ನಿರ್ದೇಶಕರು(ಸಂಶೋಧನಾ ಮತ್ತು ಉಲ್ಲೇಖನಾ)

ಸಭಾಧ್ಯಕ್ಷರ ಆದೇಶಾನುಸಾರ,
**ನಜೀರ್ ಅಹಮದ್,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

**P.R. 410**
**SC - 50**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 17ನೇ ಜೂನ್, 2013.**

2003, 2004 ಮತ್ತು 2010ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ವೆಂಕನಗೌಡ ಪಾಟೀಲ್ ಇವರಿಗೆ ವೇತನ ಶ್ರೇಣಿ 40050–1050–45300–1200–52500–1350–56500 ರಲ್ಲಿ ಉಪ ಕಾರ್ಯದರ್ಶಿಯಾಗಿ ( ಶ್ರೀ ಎನ್.ಬಾಲಗುರು, ಉಪ ಕಾರ್ಯದರ್ಶಿ ಇವರ ಸ್ವಯಂ ನಿವೃತ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 411**
**SC - 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 17ನೇ ಜೂನ್, 2013.**

2003, ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಚಂದ್ರಮ್ಮ ಇವರಿಗೆ ವೇತನ ಶ್ರೇಣಿ 28100–700–28800–800–33600–900–39000–1050–45300–1200–50100 ರಲ್ಲಿ ಅಧೀನ ಕಾರ್ಯದರ್ಶಿಯಾಗಿ ( ಶ್ರೀಮತಿ ಎಸ್.ಶಕುಂತಳ, ಅಧೀನ ಕಾರ್ಯದರ್ಶಿ ಇವರ ನಿವೃತ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 412**
**SC - 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 17ನೇ ಜೂನ್, 2013.**

2003, ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಸಿ.ಪ್ರಭು ಇವರಿಗೆ ವೇತನ ಶ್ರೇಣಿ 28100–700–28800–800–33600–900–39000–1050–45300–1200–50100 ರಲ್ಲಿ ಅಧೀನ ಕಾರ್ಯದರ್ಶಿಯಾಗಿ (ಶ್ರೀ ವೆಂಕನಗೌಡ ಪಾಟೀಲ್ ಇವರು ಉಪ ಕಾರ್ಯದರ್ಶಿಯಾಗಿ ಮುಂಬಡ್ತಿ ಹೊಂದಿರುವುದರಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 413**
**SC - 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 08ನೇ ಜುಲೈ, 2013.**

2003 ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಬಿ.ಆರ್.ಗಾಯಿತ್ರಿ ಇವರಿಗೆ ವೇತನ ಶ್ರೇಣಿ 28100–700–28800–800–33600–900–39000–1050–45300–1200–50100 ರಲ್ಲಿ ಅಧೀನ ಕಾರ್ಯದರ್ಶಿಯಾಗಿ (ಶ್ರೀ ಎಂ.ಶಾಂತಪ್ಪ, ಅಧೀನ ಕಾರ್ಯದರ್ಶಿ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 414**
**SC - 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 08ನೇ ಜುಲೈ, 2013.**

2003 ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಹನುಮಂತಗೌಡ ಪಾಟೀಲ ಇವರಿಗೆ ವೇತನ ಶ್ರೇಣಿ 22800–600–24600–700–28800–800–33600–900–39000–1050–43200 ರಲ್ಲಿ ಶಾಖಾಧಿಕಾರಿಯಾಗಿ ( ಶ್ರೀಮತಿ ಚಂದ್ರಮ್ಮ, ಶಾಖಾಧಿಕಾರಿ ಇವರ ಮುಂಬಡ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 415**
**SC- 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 08ನೇ ಜುಲೈ, 2013.**

2003 ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ತಿಮ್ಮಪ್ಪಸಂಬಯ್ಯ ಗೌಡ ಇವರಿಗೆ ವೇತನ ಶ್ರೇಣಿ 22800–600–24600–700–28800–800–33600–900–39000–1050–43200 ರಲ್ಲಿ ಶಾಖಾಧಿಕಾರಿಯಾಗಿ ( ಶ್ರೀ ಕೆ.ಸಿ.ಪ್ರಭು, ಶಾಖಾಧಿಕಾರಿ ಇವರ ಮುಂಬಡ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 416**
**SC - 100**

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ/ಆ–1/ಇಬಸ/159/2013, ಬೆಂಗಳೂರು, ದಿನಾಂಕ : 08ನೇ ಜುಲೈ, 2013.**

2003 ಮತ್ತು 2004ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಕೆ.ಎನ್.ಶಾಂತ ಇವರಿಗೆ ವೇತನ ಶ್ರೇಣಿ 22800–600–24600–700–28800–800–33600–900–39000–1050–43200 ರಲ್ಲಿ ಶಾಖಾಧಿಕಾರಿಯಾಗಿ ( ಶ್ರೀಮತಿ ಬಿ.ಆರ್.ಗಾಯತ್ರಿ, ಶಾಖಾಧಿಕಾರಿ ಇವರ ಮುಂಬಡ್ತಿಯಿಂದ ತೆರವಾದ ಹುದ್ದೆಗೆ) ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ಸಭಾಪತಿಯವರ ಆದೇಶಾನುಸಾರ,
**ಕೆ.ಬಿ.ಓಂಪ್ರಕಾಶ್,**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**P.R. 417**
**SC - 100**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 296 ಎಲ್ಎಸ್ಐ 2011, ಬೆಂಗಳೂರು, ದಿನಾಂಕ : 08ನೇ ಜುಲೈ, 2013.**

ಡಾ॥ಇಕ್ಬಾಲ್ ಷರೀಫ್, ಹಿರಿಯ ವಿಮಾ ವೈದ್ಯಾಧಿಕಾರಿ, ಕಾ.ರಾ.ವಿ. ಚಿಕಿತ್ಸಾಲಯ, ಹೊಸಕೋಟೆ, ಬೆಂಗಳೂರು ಇವರು ಸೇವೆಗೆ ಮರಳಲು ಇಚ್ಛಿಸಿರುವುದರಿಂದ ಇವರ ವಿರುದ್ಧ ಇರುವ ಶಿಸ್ತು ಕ್ರಮವನ್ನು ಕಾಯ್ದಿರಿಸಿ, ಸರ್ಕಾರದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ:ಸಿ.ಆ.ಸು.ಇ. 4 ಸೇಇವಿ 89, ದಿನಾಂಕ: 31–01-1989ರ ಪ್ರಕಾರ ಇವರನ್ನು ಕಾ.ರಾ.ವಿ. ಚಿಕಿತ್ಸಾಲಯ, ಹರಿಹರ, ಇಲ್ಲಿ ಖಾಲಿ ಇರುವ ಹಿರಿಯ ವಿಮಾ ವೈದ್ಯಾಧಿಕಾರಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋವಿಂದಸ್ವಾಮಿ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ, (ಕಾರಾವಿ ಯೋ (ವೈ) ಸೇವೆಗಳು).

**P.R. 418**
**SC - 50**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 58 ಕಾಬಾಸೇ 2013, ಬೆಂಗಳೂರು, ದಿನಾಂಕ : 10ನೇ ಜುಲೈ, 2013.**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಈ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಅವರ ಹೆಸರಿನ ಮುಂದೆ ಸೂಚಿಸಲಾದ ಸ್ಥಳಗಳಿಗೆ ವರ್ಗಾಯಿಸಿ ನೇಮಿಸಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಪದನಾಮ ಹಾಗೂ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿದ ಸ್ಥಳ |
|---|---|---|
| 1. | ಶ್ರೀ.ಎಸ್.ಆರ್. ಶ್ರೀಧರ್, ಕಾರ್ಖಾನೆಗಳ ಉಪ ನಿರ್ದೇಶಕರು, ಬಳ್ಳಾರಿ ವಿಭಾಗ, ಬಳ್ಳಾರಿ. | ಕಾರ್ಖಾನೆಗಳ ಉಪ ನಿರ್ದೇಶಕರು ಬೆಂಗಳೂರು ವಿಭಾಗ-4, ಬೆಂಗಳೂರು ಇಲ್ಲಿ ಶ್ರೀ.ಕೆ.ಶ್ರೀನಿವಾಸ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು ವಿಭಾಗ–4, ಬೆಂಗಳೂರು ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 2. | ಶ್ರೀ.ಕೆ. ಶ್ರೀನಿವಾಸ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು ವಿಭಾಗ–4, ಬೆಂಗಳೂರು. | ಕಾರ್ಖಾನೆಗಳ ಉಪ ನಿರ್ದೇಶಕರು ಬಳ್ಳಾರಿ ವಿಭಾಗ, ಬಳ್ಳಾರಿ. ಇಲ್ಲಿ ಶ್ರೀ.ಎಸ್.ಆರ್.ಶ್ರೀಧರ್, ಕಾರ್ಖಾನೆಗಳ ಉಪ ನಿರ್ದೇಶಕರು, ಬಳ್ಳಾರಿ ವಿಭಾಗ, ಬಳ್ಳಾರಿ. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 3. | ಶ್ರೀ.ಜಿ.ಪಿ. ರಾಜಗೋಪಾಲ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಳಗಾಂ ವಿಭಾಗ–1, ಬೆಳಗಾಂ. | ಕಾರ್ಖಾನೆಗಳ ಉಪ ನಿರ್ದೇಶಕರು ಬೆಂಗಳೂರು ವಿಭಾಗ–1, ಬೆಂಗಳೂರು ಇಲ್ಲಿ ಶ್ರೀ.ಎ.ಸೋಮಶೇಖರ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು ವಿಭಾಗ–1, ಬೆಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 4. | ಶ್ರೀ.ಎ. ಸೋಮಶೇಖರ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು ವಿಭಾಗ–1, ಬೆಂಗಳೂರು. | ಕಾರ್ಖಾನೆಗಳ ಉಪ ನಿರ್ದೇಶಕರು ಬೆಳಗಾಂ ವಿಭಾಗ–1, ಬೆಳಗಾಂ. ಇಲ್ಲಿ ಶ್ರೀ.ಜಿ.ಪಿ.ರಾಜಗೋಪಾಲ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಳಗಾಂ ವಿಭಾಗ–1, ಬೆಳಗಾಂ. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 5. | ಶ್ರೀ.ಕೆ.ವಿ. ಚಂದ್ರಮೌಳಿ, ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–1, ಬೆಂಗಳೂರು ಇಲ್ಲಿ ಶ್ರೀ. ಅಶೋಕ ಆರ್.ಗಾಂವಕರ್, ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–1, ಬೆಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 6. | ಶ್ರೀ. ಅಶೋಕ ಆರ್.ಗಾಂವಕರ್, ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–1, ಬೆಂಗಳೂರು. | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು ಇಲ್ಲಿ ಶ್ರೀ.ಕೆ.ವಿ.ಚಂದ್ರಮೌಳಿ, ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 7. | ಶ್ರೀ.ಆರ್.ಕೆ. ಪಾರ್ಥಸಾರಥಿ, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–6, ಬೆಂಗಳೂರು ಇಲ್ಲಿ ಶ್ರೀ.ಸತೀಶ್ ಬಾಬು, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–6, ಬೆಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 8. | ಶ್ರೀ. ಸತೀಶ್ ಬಾಬು, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–6, ಬೆಂಗಳೂರು. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–7, ಬೆಂಗಳೂರು. ಇಲ್ಲಿ ಶ್ರೀ. ಮಹದೇವ್, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–7, ಬೆಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 9. | ಶ್ರೀ. ಮಹದೇವ್, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–7, ಬೆಂಗಳೂರು. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ.ಇಲ್ಲಿ ಶ್ರೀ.ಆರ್.ಕೆ.ಪಾರ್ಥಸಾರಥಿ, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಪದನಾಮ ಹಾಗೂ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿದ ಸ್ಥಳ |
|---|---|---|
| 10. | ಶ್ರೀ. ಎಂ.ಎ.ಸೋಮಶೇಖರ್, ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–13, ಬೆಂಗಳೂರು. | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ–2, ಮೈಸೂರು. ಇಲ್ಲಿ ಶ್ರೀ. ಕೆ.ಎನ್.ಸಫೀರ್ ಅಹಮದ್, ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ–2, ಮೈಸೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |
| 11. | ಶ್ರೀ. ಕೆ.ಎನ್.ಸಫೀರ್ ಅಹಮದ್, ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ–2, ಮೈಸೂರು.. | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–13, ಬೆಂಗಳೂರು. ಇಲ್ಲಿ ಶ್ರೀ. ಎಂ.ಎ.ಸೋಮಶೇಖರ್, ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ವಿಭಾಗ–13, ಬೆಂಗಳೂರು. ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಶಿವರಾಮಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**P.R. 419**
**SC - 25**

## ಯುವಜನ ಸೇವಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಯುಸೇಇ 49 ಯುಇಸೇ 2013, ಬೆಂಗಳೂರು, ದಿನಾಂಕ : 29ನೇ ಜೂನ್, 2013.**

ಶ್ರೀ ಎಂ.ಆರ್.ಮೋಹಿತೆ, ಜಂಟಿ ನಿರ್ದೇಶಕರು (ಕ್ರೀಡೆ), ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರು ದಿನಾಂಕ:30–06–2013ರಂದು ಅಪರಾಹ್ನದಿಂದ ಜಾರಿಗೆ ಬರುವಂತೆ ಕೆಸಿಎಸ್‌ಆರ್ ನಿಯಮ 95 ಮತ್ತು 283ರನ್ವಯ ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎ.ಹಿದಾಯತ್ತುಲ್ಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

**P.R. 420**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 277 ಸಅಸೇ 2013, ಬೆಂಗಳೂರು, ದಿನಾಂಕ : 7ನೇ ಜೂನ್, 2013.**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಶ್ರೀ ಜಿ.ಶ್ರೀಧರ್, ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರಿಗೆ ವೇತನ ಶ್ರೇಣಿ ₹ 48900 – 63600ರ ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹುದ್ದೆಗೆ ಸ್ಥಾನಾಪನ್ನ ಬಡ್ತಿ ನೀಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 437**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 342 ಸಅಸೇ 2013, ಬೆಂಗಳೂರು, ದಿನಾಂಕ : 01ನೇ ಜುಲೈ, 2013.**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಸರ್ಕಾರದ ಅಧೀನ ಕಾರ್ಯದರ್ಶಿ ವೃಂದದ ಈ ಕೆಳಕಂಡ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 40050–56550ರ ವೇತನ ಶ್ರೇಣಿಯ ಉಪಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ / ಇಲಾಖೆ |
|---|---|---|
| 1) | ಶ್ರೀ ಡಿ.ನಾಗೇಶ್ ಪಾಠಕ್ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಸೇವಾ ನಿಯಮಗಳು–2) | ಸರ್ಕಾರದ ಉಪಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು–2) ಹುದ್ದೆಯನ್ನು ತಾತ್ಕಾಲಿಕವಾಗಿ ಉನ್ನತೀಕರಿಸಿ ಹಾಗೆ ಉನ್ನತೀಕರಿಸಿದ ಹುದ್ದೆಗೆ ಅಧಿಕಾರಿಯವರು ನಿವೃತ್ತರಾಗುವವರೆಗೆ ಅಥವಾ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ. |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ | ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ / ಇಲಾಖೆ |
|---|---|---|
| 2) | ಶ್ರೀ ವಡಗಾವೆ ಬಸವರಾಜ<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಆರ್ಥಿಕ ಇಲಾಖೆ. | ಸರ್ಕಾರದ ಉಪಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ ನಿರ್ದೇಶಕರು ಸಚಿವಾಲಯ ತರಬೇತಿ ಸಂಸ್ಥೆ– ಶ್ರೀ ಟಿ.ಬಿ.ರೇಣುಕಾ ಪ್ರಸಾದ್ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆಯನ್ನು ಸರ್ಕಾರದ ಉಪಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ನೇಮಿಸಿದೆ. |
| 3) | ಶ್ರೀ ಸಿ. ಶ್ರೀನಿವಾಸ<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಆರ್ಥಿಕ ಇಲಾಖೆ. | ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಪದನಿಮಿತ್ತ ಉಪಕಾರ್ಯದರ್ಶಿ ಕಂದಾಯ ಇಲಾಖೆ – ಶ್ರೀಮತಿ ಬಿ.ದೇವಿಕಾ ಇವರ ದೀರ್ಘಾವಧಿ ರಜೆಯಿಂದ ತೆರವಾದ ಹುದ್ದೆ. |
| 4) | ಶ್ರೀ ಡಿ.ಎಂ.ರಾಜಣ್ಣ<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ. | ಸರ್ಕಾರದ ಉಪಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ – ಶ್ರೀಮತಿ ರುಕ್ಮಿಣಿ ದಿವಾಕರ್ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆ. |
| 5) | ಶ್ರೀ ಸಿ.ಆರ್.ರೇವಣ್ಣ<br>ಅಧೀನ ಕಾರ್ಯದರ್ಶಿ,<br>ನಿಯೋಜನೆ ಮೇಲೆ ರಾಜ್ಯ ಚುನಾವಣಾ ಆಯೋಗ. | ಸರ್ಕಾರದ ಉಪಕಾರ್ಯದರ್ಶಿ, ಮೂಲಭೂತ ಸೌಕರ್ಯ ಇಲಾಖೆ – ಶ್ರೀಮತಿ ಕೌಸಲ್ಯ ಇವರ ವರ್ಗಾವಣೆಯಿಂದ ತೆರವಾಗಿರುವ ಹುದ್ದೆ. |
| 6) | ಶ್ರೀ ವಿ.ಸಾಯಿಬಾಬಾ<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. | ಸರ್ಕಾರದ ಉಪಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ – ಶ್ರೀ ಬಿ.ಎಫ್.ಹುಬ್ಬಳ್ಳಿ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 438**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 261 ಸಅಸೇ 2013, ಬೆಂಗಳೂರು, ದಿನಾಂಕ : 29ನೇ ಜೂನ್, 2013.**

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಶ್ರೀ ಎಸ್. ನಾರಾಯಣಸ್ವಾಮಿ, ಸರ್ಕಾರದ ಜಂಟಿ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 285(1)(ಎ) ಅನ್ವಯ ದಿನಾಂಕ 29–6–2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 439**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 144 ಶಿಸನೇ 2013, ಬೆಂಗಳೂರು, ದಿನಾಂಕ : 29ನೇ ಜೂನ್, 2013.**

ಕರ್ನಾಟಕ ಸಚಿವರುಗಳ ವೈದ್ಯಕೀಯ ಹಾಜರಾತಿಯ ನಿಯಮಗಳು 1958ರ ನಿಯಮ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ನಿಯಮ 2(ಬಿ)ನ ಷರತ್ತುಗಳನ್ನು ವಿನಾಯಿತಿಸಿ, ಡಾ॥ ಮೋಹನ್, ತಜ್ಞ ವೈದ್ಯರು, ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು ಇವರನ್ನು ಮಾನ್ಯ ಲೋಕೋಪಯೋಗಿ ಸಚಿವರ ಆಪ್ತ ವೈದ್ಯ (Authorised Medical Attendant)ರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ನೇಮಿಸಿದೆ.

ಸದರಿ ವೈದ್ಯರು ಪ್ರಸ್ತುತ ಪಡೆಯುತ್ತಿರುವ ವೇತನ ಹೊರತುಪಡಿಸಿ ಯಾವುದೇ ಗೌರವ ಧನ/ಭತ್ಯೆಗಳನ್ನು ಪಡೆಯಲು ಅವಕಾಶವಿರುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್,ನಾಗರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

**P.R. 440**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು